# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 768 |
| ಸದಸ್ಯರ ಹೆಸರು | ಪಿ.ಆರ್ ರಮೇಶ್ (ನಾಮನಿರ್ದೇಶನ ಹೊಂದಿದವರು) |
| ಉತ್ತರಿಸುವವರು | ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವರು |
| ಉತ್ತರಿಸಬೇಕಾದ ದಿನಾಂಕ | 05.03.2021 |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕಳೆದ 5 ವರ್ಷಗಳಲ್ಲಿ ರಾಜ್ಯದಲ್ಲಿ ಮಹಿಳಾ ಸ್ವ-ಸಹಾಯ ಗುಂಪುಗಳ ಸಬಲೀಕರಣ ಪ್ರಯುಕ್ತ ರಾಜ್ಯ ಸರ್ಕಾರದಿಂದ ಯಾವ ಯೋಜನೆಗಳನ್ನು ಕಲ್ಪಿಸಲಾಗಿದೆ; (ವಿವರ ನೀಡುವುದು) | ಕಳೆದ 5 ವರ್ಷಗಳಲ್ಲಿ ಸ್ತ್ರೀ ಶಕ್ತಿ ಯೋಜನೆಯಡಿ ಮಹಿಳಾ ಸ್ವ-ಸಹಾಯ ಗುಂಪುಗಳ ಸಬಲೀಕರಣಕ್ಕಾಗಿ ಈ ಕೆಳಕಂಡ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ.<br><br>1. <u>ಸುತ್ತುನಿಧಿ:-</u> 2016-17 ಮತ್ತು 2017-18 ರಲ್ಲಿ ಮಂಜೂರಾದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸ್ತ್ರೀಶಕ್ತಿ ಗುಂಪುಗಳಲ್ಲಿ ಕನಿಷ್ಠ 6 ತಿಂಗಳ ಉಳಿತಾಯ ನಿರ್ವಹಿಸಿರುವ ಪ್ರತಿಯೊಂದು ಗುಂಪಿಗೆ ಸುತ್ತನಿಧಿಯಾಗಿ ಪ್ರಥಮ ಹಂತದಲ್ಲಿ ರೂ.5,000/- ಸುತ್ತುನಿಧಿ ನೀಡಲಾಗುತ್ತಿದೆ. ಗುಂಪಿನ ಸದಸ್ಯರು ತಮ್ಮ ಉಳಿತಾಯ ಹಾಗೂ ಸುತ್ತುನಿಧಿಯನ್ನು ಬಳಸಿಕೊಂಡು ವಿವಿಧ ಚಟುವಟಿಕೆಗಳನ್ನು ಪ್ರಾರಂಭಿಸಲು ಅನುಕೂಲವಾಗಿದೆ.<br><br>2. <u>ಹೆಚ್ಚುವರಿ ಸುತ್ತುನಿಧಿ:-</u> ಸ್ತ್ರೀಶಕ್ತಿ ಸ್ವ-ಸಹಾಯ ಗುಂಪುಗಳಿಗೆ ನೀಡುತ್ತಿರುವ ಸುತ್ತುನಿಧಿ ಮಿತಿಯನ್ನು ರೂ.5,000/- ರಿಂದ ರೂ.25,000/-ಗಳಿಗೆ ಹಂತ ಹಂತವಾಗಿ ಹೆಚ್ಚಿಸಿದ್ದು 2014-15 ರಿಂದ 2017-18 ಸಾಲಿನವರಗೆ ಪ್ರತಿ ವರ್ಷ ಪ್ರತಿ ಗುಂಪಿಗೆ ರೂ.5,000/- ದಂತೆ ಹೆಚ್ಚುವರಿ ಪ್ರೋತ್ಸಾಹಧನ ನೀಡಲಾಗಿದೆ.<br><br>3. <u>ಬ್ಯಾಂಕ್ ಲಿಂಕೇಜ್:-</u> ಪ್ರಮುಖ ರಾಷ್ಟ್ರೀಕೃತ ಬ್ಯಾಂಕ್ ಹಾಗೂ ಸಹಕಾರಿ ಬ್ಯಾಂಕುಗಳೊಂದಿಗೆ ಸ್ವ-ಸಹಾಯ ಗುಂಪುಗಳಿಗೆ ಸಂಪರ್ಕವನ್ನು ಕಲ್ಪಿಸಿ ಸಾಲವನ್ನು ಪಡೆದು ವಿವಿಧ ಆದಾಯೋತ್ಪನ್ನ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಲು ಅನುಕೂಲವನ್ನು ಒದಗಿಸಿದೆ.<br><br>4. <u>ಅಧಿಕ ಉಳಿತಾಯ ಮಾಡಿರುವ ಗುಂಪುಗಳಿಗೆ ಪ್ರೋತ್ಸಾಹಧನ:-</u> ಗುಂಪುಗಳಲ್ಲಿ ಉಳಿತಾಯ ಮನೋಭಾವನೆಯನ್ನು ಪ್ರೋತ್ಸಾಹಿಸಲು ರೂ.75,000/- ದಿಂದ ರೂ.1.00 ಲಕ್ಷದವರಗೆ ಉಳಿತಾಯ ಮಾಡಿರುವ ಗುಂಪುಗಳಿಗೆ ತಲಾ ರೂ.15,000/-ಗಳ ಹಾಗೂ ರೂ.1.00 ಲಕ್ಷಕ್ಕೂ ಹೆಚ್ಚು ಉಳಿತಾಯ ಮಾಡಿರುವ ಗುಂಪುಗಳಿಗೆ ತಲಾ ರೂ.20,000/- ಪ್ರೋತ್ಸಾಹಧನವನ್ನು ನೀಡಲಾಗುತ್ತಿದೆ.<br><br>5. <u>ಸಾಲದ ಮೇಲಿನ ಬಡ್ಡಿಗೆ ಶೇ.6ರ ಸಹಾಯಧನ:-</u> ರೂ.25,000/- ದಿಂದ ರೂ.1.00 ಲಕ್ಷದವರೆಗೆ ಸಾಲವನ್ನು ಪಡೆಯುವ ಸ್ತ್ರೀಶಕ್ತಿ ಗುಂಪುಗಳಿಗೆ ಸಾಲದ ಮೇಲಿನ ಬಡ್ಡಿ ದರಕ್ಕೆ ಶೇ.6ರ ಸಹಾಯ ಧನವನ್ನು ಒದಗಿಸಲಾಗಿದೆ.<br><br>6. <u>ವಸ್ತು ಪ್ರದರ್ಶನ ಮತ್ತು ಮಾರಾಟ ಮೇಳ;-</u> ಸ್ತ್ರೀಶಕ್ತಿಗುಂಪಿನ ಸದಸ್ಯರಿಗೆ ತಾವು ಉತ್ಪಾದಿಸಿದ ವಸ್ತುಗಳನ್ನು ಮಾರಾಟ ಮಾಡಲು ಅನುವು ಮಾಡಿಕೊಡಲು ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದಲ್ಲಿ ವಸ್ತು ಪ್ರದರ್ಶನ ಮತ್ತು ಮಾರಾಟ ಮೇಳಗಳನ್ನು ಏರ್ಪಡಿಸಲು ಪ್ರತಿ ಜಿಲ್ಲೆಗೆ ಪ್ರತಿ ವರ್ಷ ರೂ.75,000/- ಗಳನ್ನು ಬಿಡುಗಡೆಗೊಳಿಸಲಾಗುತ್ತಿದೆ. ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ವಿವಿಧ ರಾಜ್ಯಗಳಲ್ಲಿ ಹಾಗೂ ರಾಷ್ಟ್ರ ಮಟ್ಟದಲ್ಲಿ ವಸ್ತು ಪ್ರದರ್ಶನ ಮತ್ತು ಮಾರಾಟ ಮೇಳಗಳಲ್ಲಿ ಸ್ತ್ರೀಶಕ್ತಿ ಗುಂಪುಗಳು ಉತ್ಪಾದಿಸುವ ವಸ್ತುಗಳನ್ನು ಮಾರಾಟ ಮಾಡಲು ಅವಕಾಶ ಕಲ್ಪಿಸಲಾಗಿದೆ ಮತ್ತು ಸ್ತ್ರೀಶಕ್ತಿ ಸಮಾವೇಶಗಳನ್ನು ನಡೆಸಲಾಗುತ್ತಿದೆ. |

| | | |
|---|---|---|
| | | 7. ಮಾರುಕಟ್ಟೆ ಸೌಲಭ್ಯ:- ಸ್ತ್ರೀಶಕ್ತಿ ಗುಂಪುಗಳ ಉತ್ಪನ್ನಗಳನ್ನು ಮಾರಾಟ ಮಾಡಲು ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಸ್ತ್ರೀಶಕ್ತಿ ಭವನಗಳನ್ನು ನಿರ್ಮಿಸಲಾಗಿದೆ.<br><br>8. ತರಬೇತಿ:- ಸ್ತ್ರೀಶಕ್ತಿ ಗುಂಪಿನ ಸದಸ್ಯರಿಗೆ ಕೌಶಲ್ಯ ಆಭಿವೃದ್ಧಿ ತರಬೇತಿಯನ್ನು ನೀಡಲಾಗುತ್ತಿದೆ.<br><br>9. ಪ್ರಶಸ್ತಿ:- ಸ್ತ್ರೀಶಕ್ತಿ ಗುಂಪುಗಳಿಗೆ ಉತ್ತೇಜನ ನೀಡುವ ಸಲುವಾಗಿ ಅತ್ಯುತ್ತಮವಾಗಿ ಕಾರ್ಯನಿರ್ವಹಿಸುತ್ತಿರುವ 3 ಸ್ತ್ರೀಶಕ್ತಿ ಗುಂಪುಗಳಿಗೆ ಹಾಗೂ 3 ತಾಲ್ಲೂಕು ಒಕ್ಕೂಟಗಳಿಗೆ ನಗದು ಬಹುಮಾನವನ್ನು ಮತ್ತು ಪ್ರಶಸ್ತಿ ಪತ್ರವನ್ನು ಪ್ರತಿ ವರ್ಷ ಮಾರ್ಚ್-08 ರಂದು ಅಂತರಾಷ್ಟ್ರೀಯ ಮಹಿಳಾ ದಿನಾಚರಣೆಯೆಂದು ನೀಡಿ ಗೌರವಿಸಲಾಗುತ್ತಿದೆ.<br><br>10. ಸ್ತ್ರೀಶಕ್ತಿ ಸ್ವ-ಸಹಾಯ ಗುಂಪುಗಳು ತಯಾರಿಸುವ ಉತ್ಪನ್ನಗಳನ್ನು ಸರ್ಕಾರದ ಇಲಾಖೆಗಳಲ್ಲಿ ಅವಶ್ಯಕತೆಗೆ ಅನುಸಾರವಾಗಿ ಖರಿದಿ ಮಾಡಲು ಅವಕಾಶ ಕಲ್ಪಿಸಲಾಗಿದೆ.<br><br>11. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸ್ತ್ರೀಶಕ್ತಿ ಸಂಘಗಳ ಆರ್ಥಿಕ ಸಬಲೀಕರಣಕ್ಕಾಗಿ ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ಮೂಲಕ ಕಿರುಸಾಲ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಸದರಿ ಯೋಜನೆಯಡಿ ಗುಂಪಿನ ಉಳಿತಾಯಕ್ಕೆ ಅನುಗುಣವಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸ್ತ್ರೀಶಕ್ತಿ ಸಂಘಗಳಿಗೆ ಗರಿಷ್ಟ ರೂ.3.00 ಲಕ್ಷಗಳವರೆಗೆ ಹಾಗೂ ಇತರೆ ವರ್ಗದ ಸ್ತ್ರೀಶಕ್ತಿ ಸಂಘಗಳಿಗೆ ರೂ.2.00 ಲಕ್ಷಗಳ ಬಡ್ಡಿ ರಹಿತ ಸಾಲವನ್ನು ಒದಗಿಸಲಾಗುತ್ತಿದೆ. |
| ಆ | ರಾಜ್ಯದ ಮಹಿಳಾ ಸ್ವ-ಸಹಾಯ ಗುಂಪುಗಳಿಗೆ ಕೇಂದ್ರ ಸರ್ಕಾರದಿಂದ ಮತ್ತು ರಾಜ್ಯ ಸರ್ಕಾರದಿಂದ ಎಷ್ಟು ಮೊತ್ತದ ಅನುದಾನವನ್ನು ಒದಗಿಸಲಾಗಿದೆ; (ವಿವರ ನೀಡುವುದು) | ಸ್ತ್ರೀಶಕ್ತಿ ಯೋಜನೆಯಡಿ ರಚಿಸಲಾದ ಮಹಿಳಾ ಸ್ವ-ಸಹಾಯ ಗುಂಪುಗಳಿಗೆ ಕೇಂದ್ರ ಸರ್ಕಾರದಿಂದ ಯಾವುದೇ ಅನುದಾನ ಒದಗಿಸಿರುವುದಿಲ್ಲ. ರಾಜ್ಯ ಸರ್ಕಾರದಿಂದ ಒದಗಿಸಲಾದ ಅನುದಾನದ ವಿವರವನ್ನು ಅನುಬಂಧಲ್ಲಿ ಒದಗಿಸಲಾಗಿದೆ. |
| ಇ | ರಾಜ್ಯದ ಮಹಿಳಾ ಸ್ವ-ಸಹಾಯ ಗುಂಪುಗಳ ಸ್ಥಿತಿಗತಿಗಳ ಕುರಿತು ಮೌಲ್ಯಮಾಪನ ಸಮಿಕ್ಷೆಯನ್ನು ನಡೆಸಲಾಗಿದೆಯೇ; ಇಲ್ಲದಿದಲ್ಲಿ ನಡೆಸಲು ಚಿಂತಿಸಲಾಗಿದೆಯೇ? (ವಿವರ ನೀಡುವುದು) | ಸ್ತ್ರೀಶಕ್ತಿ ಯೋಜನೆಯಡಿ ರಚಿಸಲಾದ ಮಹಿಳಾ ಸ್ವ-ಸಹಾಯ ಗುಂಪುಗಳ ಸ್ಥಿತಿಗತಿಗಳ ಬಗ್ಗೆ ಈವರಗೆ ಮೌಲ್ಯಮಾಪನ ಸಮೀಕ್ಷೆ ನಡೆಸಿರುವುದಿಲ್ಲ. ಈ ಬಗ್ಗೆ ಪರಿಶೀಲಿಸಲಾಗುವುದು. |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ,
ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ: ಮಮಇ 27 ಮಮಅ 2021

# ಅನುಬಂಧ

| ಮಾನ್ಯ ವಿಧಾನ ಪರಿಷತ್ ಸದಸ್ಯರಾದ ಶ್ರೀ ಪಿ.ಆರ್ ರಮೇಶ್ ರವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 768 | | | | |
|---|---|---|---|---|
| ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆವತಿಯಿಂದ ಕಳೆದ 5 ವರ್ಷಗಳಲ್ಲಿ ಸ್ತ್ರೀಶಕ್ತಿ ಯೋಜನೆಯಡಿ ರಚಿಸಲಾದ ಮಹಿಳಾ ಸ್ವ-ಸಹಾಯ ಗುಂಪುಗಳಿಗೆ ಒದಗಿಸಲಾದ ಅನುದಾನದ ವಿವರ (ರೂ.ಲಕ್ಷಗಳಲ್ಲಿ) | | | | |
| ವರ್ಷ | ಗುಂಪುಗಳ ಬಲವರ್ಧನೆಗೆ ಒದಗಿಸಲಾದ ಅನುದಾನ (ಸುತ್ತು ನಿಧಿ, ಹೆಚ್ಚುವರಿ ಸುತ್ತು ನಿಧಿ, ಪ್ರೋತ್ಸಾಹ ಧನ, ಶೇ 6 ಬಡ್ಡಿ ಸಹಾಯಧನ, ತರಬೇತಿ, ವಸ್ತು ಪ್ರದರ್ಶನ ಮತ್ತು ಮಾರಾಟ ಮೇಳ, ಸ್ತ್ರೀಶಕ್ತಿ ಸಮಾವೇಶ ಮತ್ತು ಪ್ರಶಸ್ತಿ) | ತಾಲ್ಲೂಕು ಸ್ತ್ರೀಶಕ್ತಿ ಭವನಗಳ ನಿರ್ಮಾಣ | ವಿಭಾಗ ಮಟ್ಟದ ಸ್ತ್ರೀಶಕ್ತಿ ತರಬೇತಿ ಕೇಂದ್ರಗಳ ನಿರ್ಮಾಣ | ವಿಶೇಷ ಅಭಿವೃದ್ಧಿ ಯೋಜನೆ |
| 2015–16 | 7423.00 | 200.00 | 100.00 | 100.00 |
| 2016–17 | 7691.00 | 150.00 | 100.00 | – |
| 2017–18 | 7415.00 | 25.00 | 50.00 | – |
| 2018–19 | 1400.00 | 1.00 | 20.00 | – |
| 2019–20 | 1000.00 | – | 20.00 | – |
| 2020–21 | 502.00 | – | – | – |

ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದವತಿಯಿಂದ ಕಳೆದ 5 ವರ್ಷಗಳಲ್ಲಿ ಸ್ತ್ರೀಶಕ್ತಿ ಯೋಜನೆಯಡಿ ರಚಿಸಲಾದ ಮಹಿಳಾ ಸ್ವ-ಸಹಾಯ ಗುಂಪುಗಳಿಗೆ ಒದಗಿಸಲಾದ ಅನುದಾನದ ವಿವರ (ರೂ.ಲಕ್ಷಗಳಲ್ಲಿ)

| Sl. No. | Year | Allocated grants | Amount allocated from unspent amount of SCSP/TSP |
|---|---|---|---|
| 1 | 2015-16 | 500.00 | - |
| 2 | 2016-17 | 1000.00 | - |
| 3 | 2017-18 | 1000.00 | - |
| 4 | 2018-19 | 500.00 | 545.00 |
| 5 | 2019-20 | 500.00 | 1800.00 |